# ಗೊರವಯ್ಯ

(ಮಕ್ಕಳ ಅಭಿನಯ ಗೀತೆಗಳು)




ಪ್ರಕಾಶಕರು :

ಆದರ್ಶ ನಾಟಕ ಸಭ (ರಿ.)

11, ಸಿದ್ದಣ್ಣಗಲ್ಲಿ, ಜುಮ್ಮಾಮಸೀದಿ ರಸ್ತೆ, ಬೆಂಗಳೂರು-2

# ಚಿಕ್ಕ ಸಂಸಾರ ಸುಖಕ್ಕೆ ಆಧಾರ

ಸಂಸಾರಸುಖಕ್ಕೆ ಮಿತಸಂತಾನವೇ ಯೋಗ್ಯ ದಾರಿ!
ಪ್ರತಿಯೊಬ್ಬರೂ ಕುಟುಂಬ ಯೋಜನೆಯ
ತಾತ್ಕಾಲಿಕ ಅಥವ ಶಾಶ್ವತ ಮಾರ್ಗಗಳನ್ನು ಅನುಸರಿಸಿ
ವೈಯಕ್ತಿಕ, ರಾಜ್ಯದ ಮತ್ತು ರಾಷ್ಟ್ರದ ಹಿತಕ್ಕಾಗಿ

**ಸಂತಾನವನ್ನು ಮಿತಗೊಳಿಸಿ!**

## ಇದು ನಿಮಗೆ ಗೊತ್ತೆ?

**ಕುಟುಂಬ ಯೋಜನೆಯನ್ನು ಅನುಸರಿಸುವವರಿಗೆ**
**ಸರ್ಕಾರದ ಪ್ರೋತ್ಸಾಹ**

ಶಸ್ತ್ರಚಿಕಿತ್ಸೆ ಪಡೆಯುವ

| | |
|---|---|
| ಪ್ರತಿಯೊಬ್ಬ ಗಂಡಸಿಗೆ ಧನಸಹಾಯ | ರೂ. 18/- |
| ಪ್ರತಿಯೊಬ್ಬ ಹೆಂಗಸಿಗೆ ಧನಸಹಾಯ | ,, 25/- |

ಪ್ರೋತ್ಸಾಹಕರಿಗೆ

| | |
|---|---|
| ಕರೆದುತಂದ ಪ್ರತಿಯೊಬ್ಬನಿಗೆ ಧನಸಹಾಯ | ,, 2/- |
| ವಂಕಿ ಅಳವಡಿಸಿಕೊಂಡ (Loop) | |
| ಪ್ರತಿಯೊಬ್ಬ ಮಹಿಳೆಗೆ ಧನಸಹಾಯ | ,, 5/- |
| ಪ್ರೋತ್ಸಾಹಕರಿಗೆ | ,, 1/- |

ಜನಾರೋಗ್ಯ ಇಲಾಖೆ — ಮಿತಸಂತಾನ ವಿಭಾಗ

# ಗೊರವಯ್ಯ

( ಮಕ್ಕಳ ಅಭಿನಯ ಗೀತೆಗಳು )

ಬರೆದವರು :

**ಕೋಸು. ಸಂಪುಟಾಣೆ, ಬಿ.ಇ.**



ಪ್ರಕಾಶಕರು :

ಆದರ್ಶ ನಾಟಕ ಸಭ (ರಿ.)

11, ಸಿದ್ದಣ್ಣಗಲ್ಲಿ, ಜುಮ್ಮಾಮಸೀದಿ ರಸ್ತೆ

ಬೆಂಗಳೂರು – 2

ಪ್ರಥಮ ಮುದ್ರಣ — 14 ನೇ ನವೆಂಬರ್ 1967



ಬೆಲೆ : ನಲವತ್ತು ಪೈಸೆಗಳು

ಈ ಪುಸ್ತಕ ದೊರೆಯುವ ಸ್ಥಳ :

1. ಶ್ರೀ ಬಿ. ಕೆ. ಅಪ್ಪಯ್ಯ ದೀಕ್ಷಿತ್
ಆದರ್ಶ ನಾಟಕ ಸಭ (ರಿ.)
11, ಸಿದ್ದಣ್ಣಗಲ್ಲಿ, ಜುಮ್ಮಾಮಸೀದಿ ರಸ್ತೆ
ಬೆಂಗಳೂರು - 2.

2. ಶ್ರೀಮತಿ ಪ್ರಭಾ ಸಂಪುಟಾಣೆ
"ಪ್ರಭಾ", 180, ಲಕ್ಕಸಂದ್ರ ಬಡಾವಣೆ
ಬೆಂಗಳೂರು - 27.

ಮುದ್ರಕರು :
ಮನು ಪ್ರಿಂಟಿಂಕ್, ಗಾಂಧಿನಗರ, ಬೆಂಗಳೂರು - 9.

# ಆಶೀರ್ವಾದ

ಶ್ರೀ ಶಿವಕುಮಾರಸ್ವಾಮಿಗಳು ದಿನಾಂಕ 13-11-1967
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ
*No. S. M. No. 1198/67-68.*

ಸಂಸ್ಕೃತಿ ಪ್ರಚಾರದ ಹೊರೆ ಹೊತ್ತು ಸಮಾಜವನ್ನು ಸನ್ಮಾರ್ಗಕ್ಕೆ ತಿರುಗಿಸಲು ಶ್ರಮಿಸುತ್ತಿರುವ ಬೆಂಗಳೂರು ಆದರ್ಶ ನಾಟಕ ಸಂಸ್ಥೆಯವರು ಸಾಹಿತ್ಯ ಸೇವೆಯನ್ನೂ ಕೈಗೊಂಡಿರುವುದು ಸಂತೋಷಪ್ರದವಾಗಿದೆ.

ಅದರಲ್ಲಿಯೂ ಮುಂದಿನ ಸತ್ಪ್ರಜೆಗಳಾಗಬೇಕಾಗಿರುವ ಮಕ್ಕಳನ್ನು ತಿದ್ದಿ ಸುಸಂಸ್ಕೃತರನ್ನಾಗಿ ಮಾಡುವ ಸಲುವಾಗಿ "ಶಿಶು ಸಾಹಿತ್ಯ" ವನ್ನು ರಚಿಸಿರುವ ಶ್ರೀ ಕೋಸು. ಸಂಪುಟಾಣೆ, ಬಿ.ಎಸ್‌ಸಿ., ಬಿ.ಇ., ರವರ ಮತ್ತು ಈ ಸಾಹಿತ್ಯವನ್ನು ಪ್ರಕಾಶನ ಮಾಡುತ್ತಿರುವ ನಾಟಕ ಸಂಸ್ಥೆಯವರ ಸೇವೆಯು ಮೆಚ್ಚತಕ್ಕದ್ದಾಗಿದೆ.

ಇವರ ಈ ಸತ್ಪ್ರಯತ್ನವು ಮಕ್ಕಳಲ್ಲಿರುವ ಸುಪ್ತ ಚೇತನವನ್ನು ಜಾಗ್ರತಗೊಳಿಸಿ, ಅವರಲ್ಲಿ ಆದರ್ಶ ವ್ಯಕ್ತಿತ್ವವು ರೂಪುಗೊಳ್ಳುವುದರಲ್ಲಿ ಸಂಪೂರ್ಣ ಫಲಕಾರಿಯಾಗುವಂತೆ ಪರಶಿವನು ಅನುಗ್ರಹಿಸಲೆಂದು ಹಾರೈಸುತ್ತೇವೆ.

13-11-1967. —ಶ್ರೀ ಶಿವಕುಮಾರಸ್ವಾಮಿಗಳು
ಶ್ರೀ ಸಿದ್ಧಗಂಗಾ ಮಠ.

# ಬೆಳ್ಳಿಯ ಹಬ್ಬದ ಉಡುಗೊರೆ

ಆದರ್ಶ ನಾಟಕ ಸಭ, ಸುಮಾರು 6–7 ವರ್ಷಗಳಿಂದಲೂ ಕಲಾಕ್ಷೇತ್ರದಲ್ಲಿ ಅನೇಕ ನವರಸಭರಿತ ನಾಟಕಗಳ ಪ್ರಯೋಗವನ್ನು ಮಾಡುತ್ತ ರಂಗಮಂಟಪದ ಮೇಲೆ ಜನರಂಜನೆ ಹಾಗೂ ಸಮಾಜ ಸುಧಾರಣೆಯ ಕಾರ್ಯವನ್ನೆಸಗುತ್ತಿರುವುದು ಸರಿಯಷ್ಟೆ. ಈವರೆವಿಗೂ ಸಭದ ನುರಿತ ಕಲಾವಿದರು ಕವಿದೇವ ರತ್ನಾಕರ ಬಸವಣ್ಣನವರ ಭಾವೈಕ್ಯ ಸಾಧನೆ, ಪಿಕ್‌ಪಾಕೆಟ್ ಮೊದಲಾದ ಅತಿ ಅಚ್ಚುಮೆಚ್ಚಿನ ನಾಟಕಗಳನ್ನು ಅನೇಕ ವಿಶೇಷ ಸಂದರ್ಭಗಳಲ್ಲಿ ಹಲವಾರು ಬಾರಿ ಪ್ರದರ್ಶಿಸಿ ಕಲಾಭಿಮಾನಿಗಳ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದಾರೆಂದು ತಿಳಿಸಲು ಹರ್ಷವಾಗುತ್ತದೆ. ಕಲಾಸೇವೆಗಾಗಿಯೇ ಮೀಸಲಾಗಿದ್ದ ನಮ್ಮ ಸೇವಾಕ್ಷೇತ್ರವನ್ನು ವಿಸ್ತರಿಸುವ ಮಹದಾಕಾಂಕ್ಷೆ ನಮ್ಮಲ್ಲಿ ಬಹು ದಿವಸಗಳಿಂದಲೂ ಇತ್ತು. ಈಗ ನಮ್ಮ ಸಂಘದ ಸಾಹಿತಿಗಳಾದ ಶ್ರೀ ಕೋಸು. ಸಂಪುಟಾಣೆಯವರ ಗೊರವಯ್ಯನನ್ನು ಹೊರತರುವುದರ ಮೂಲಕ ನಮ್ಮ ಸಾಹಿತ್ಯ ಕ್ಷೇತ್ರದ ಸೇವಾಸಂಕಲ್ಪವು ಈಡೇರಿದಂತಾಗಿದೆ. ಶ್ರೀಯುತರು ಯಾವ ಪ್ರತಿಫಲವನ್ನೂ ಬಯಸದೆ ಅವರ ಗೊರವಯ್ಯನನ್ನು ಪ್ರಕಟಿಸಲು ಒಪ್ಪಿ, ಇದರಿಂದ ಬರಬಹುದಾದಂತಹ ಹಣವನ್ನು ಯಾವುದಾದರೂ ಯೋಗ್ಯ ಶಿವವಿಹಾರಗಳಿಗೆ ಸಹಾಯಾರ್ಥವಾಗಿ ಕೊಡುವಂತಹ ನಮ್ಮ ಸೇವಾಭಿಪ್ರಾಯಕ್ಕೆ ಮನ್ನಣೆಯನ್ನಿತ್ತು ತಾವು ಸಮ್ಮತಿಸಿರುವುದಕ್ಕೆ ಅವರಿಗೆ ನಮ್ಮ ಸಂಘವು ಋಣಿ. ಈ ಪ್ರಕಟಣೆಯ ಕಾರ್ಯದಲ್ಲಿ ಸಹಕಾರ ನೀಡಿದವರಿಗೆಲ್ಲ ನಮ್ಮ ಕೃತಜ್ಞತೆಗಳು. ಈ ಹೊತ್ತಿಗೆಯನ್ನು ಹೊರತರಲು ಆಶೀರ್ವದಿಸಿರುವ ಶ್ರೀ ಶ್ರೀ ಶ್ರೀ ಶಿವಕುಮಾರಸ್ವಾಮಿಗಳು, ಸಿದ್ಧಗಂಗಾಮಠ ಅವರಿಗೆ ನಮ್ಮ ಶರಣಾರ್ಥಿಗಳು.

—ಪ್ರಕಾಶಕರು.

# ಮುನ್ನುಡಿ

ಸುಮಾರು ಇಪ್ಪತ್ತು ವರ್ಷಗಳಿಂದ ಕನ್ನಡದಲ್ಲಿ ಲೇಖಕರಾಗಿ, ಗ್ರಂಥಕಾರರಾಗಿ ಪತ್ರಿಕಾಕರ್ತರಾಗಿ ಕೆಲಸ ಮಾಡುತ್ತಿರುವ ಶ್ರೀ ಕೋಸು, ಸಂಪುಟಾಣೆಯವರು ಬಂಗಾರದ ಬಾಳು, ಕವನ ಕಿಡಿ, ಕೊಳಲು ಮೊದಲಾದ ಗ್ರಂಥಗಳನ್ನು ಬರೆದು ಕನ್ನಡಿಗರಿಗೆ ತಕ್ಕ ಮಟ್ಟಿಗೆ ಪರಿಚಿತರಾಗಿದ್ದಾರೆ. ಇವರು ಉಭಯ ಪದವೀಧರರಾಗಿದ್ದು ಸರ್ಕಾರದ ಕೆಲಸದಲ್ಲಿ ನಿರತರಾಗಿ ಜನ್ಮತಃ ಸಾಹಿತ್ಯದ ಸಂಸ್ಕಾರವನ್ನು ಪಡೆದುಕೊಂಡಿದ್ದಾರೆ. ಇವರ ಕವಿತೆಗಳಲ್ಲಿ ಕೆಲವು ವೃಂದಗಾನದಲ್ಲಿ ಹಾಡಲು ಅನುಕೂಲವಾಗಿವೆ; ಮತ್ತೆ ಕೆಲವು ಜನಪದ ಸಾಹಿತ್ಯದಂತೆ ಭಾವಭಂಗಿಯಿಂದ ಹೇಳಲು ಅನುಕೂಲವಾಗಿವೆ. ಹಿಂದಣ ಇವರ ಕವಿತೆಗಳು ಹಿರಿಯರನ್ನು ಕುರಿತು ಬರೆದವುಗಳು. ಜನಜೀವನದಲ್ಲಿ ಕವಿಗೆ ಉಂಟಾದ ಸುಖ ದುಃಖಗಳ ಪರಿಣಾಮವನ್ನು ಈ ಕವಿತೆಗಳಲ್ಲಿ ನಾವು ಕಾಣಬಹುದು.

ಪ್ರಕೃತ ಗ್ರಂಥವಾದ ಗೊರವಯ್ಯ ಹದಿನಾರು ಗೀತೆಗಳಿಂದ ಕೂಡಿದೆ. ಇವನ್ನು ಮಕ್ಕಳು ಹಾಡಿ ಕುಣಿಯುವ ಧಾಟಿಯಿಂದ ಬರೆಯಲಾಗಿದೆ. ಆದಕ್ಕೆ ಅನುಗುಣವಾದ ಗೊರವಯ್ಯನ ಚಿತ್ರದ ಮುಖಪುಟವಿದೆ. ಹುಡುಗರನ್ನು ಆಕರ್ಷಿಸುವ ಚಿತ್ರಗಳಿವೆ.

ಮೊದಲನೆಯ ಕವಿತೆ "ಸೊಂಡಿಲ ಗಣಪ, ಸುಂಡಿಲಿ ಭೂಪ ಬಂದಾ ಬಂದಾ ಬಂದಾ ಬಂದ, ಕಾಯಿ ಕಡಬು ಹೊಟ್ಟೇ ಡುಬ್ಬ ತಂದಾ ತಂದಾ ತಂದಾ ತಂದಾ" ಎಂದು ಪ್ರಾರಂಭವಾಗಿದೆ. ಮಕ್ಕಳಿಗೆ ಗಣಪತಿಯನ್ನು ಕಂಡರೆ ಪ್ರೀತಿ. ಕಾಯಿಕಡುಬುಗಳನ್ನು ಕಂಡರೆ ಆಶೆ. ಮೇಲಾಗಿ ವಿದ್ಯಾಧಿಪತಿ ಆದ ಗಣಪತಿಯ ಬಗ್ಗೆ ಶ್ರದ್ಧೆ, ಭಕ್ತಿ. ಆದುದರಿಂದ ಈ ಕವಿತೆಯನ್ನು ಓದಲು ಪ್ರಾರಂಭಿಸಿದ ಮಕ್ಕಳ ಮನಸ್ಸಿನಲ್ಲಿ ಹುರುಪು ಉತ್ಸಾಹ

ಬರುವುದು ಸ್ವಾಭಾವಿಕ. ಎರಡನೆಯ ಗೀತೆ ಬತ್ತಾಬತ್ತಾ ಎಂದು ಪ್ರಾರಂಭವಾಗುತ್ತದೆ. ಬತ್ತ ಬೆಳೆದು ಜಗಕೆಲ್ಲ ಉಣಿಸೋಣ ರೈತ ಜೀವನವ ಸಾರ್ಥಕವಪಡಿಸೋಣ ಎಂದು ಮುಗಿಯುತ್ತದೆ. ಈ ಹಾಡನ್ನು ಹಾಡುವಾಗ ರೈತರ ಮಕ್ಕಳು ತಮ್ಮ ನಿತ್ಯ ಜೀವನದ ಅನುಭವಗಳನ್ನೇ ನೆನೆಸಿಕೊಂಡು ಹರುಷದಿಂದ ಕುಣಿಯುತ್ತಾರೆ. ಮೂರನೆಯ ಕವಿತೆ 'ಕಂದನಿಗೆ ಸುಪ್ರಿ' ಎಂಬುದು, ಹೊತ್ತುಟ್ಟಿ ಹೊತ್ತಾಯ್ತು ಎದ್ದೇಳು ಕಂದ. ಹಲ್ಲುಜ್ಜಿ ಮೈ ತೊಳೆದು ನಮಿಸಯ್ಯ ಚಂದ. ತಿಂಡಿ ತೀರ್ಥವ ಮುಗಿಸಿ, ಶಿಸ್ತು ಶಾಲೆಗೆ ಹೋಗು ಆಟ ಪಾಠದ ಜತೆಗೆ ಗುರುಗಳಿಗೆ ಬಾಗು ಎಂದು ಪ್ರಾರಂಭವಾಗುತ್ತೆ. ಇದು ನಾಡಿನ ಮಕ್ಕಳು ಬೆಳಗಾದರೆ ಮಾಡಬೇಕಾದ ಕಾರ್ಯ. ಹೀಗೆ ಈ ಗ್ರಂಥಸ್ಥವಾದ ಕವಿತೆಗಳು ಮಕ್ಕಳ ನಿತ್ಯ ಜೀವನಕ್ಕೆ ಸಂಬಂಧಪಟ್ಟು ಅವರಿಗೆ ಉತ್ಸಾಹವನ್ನು ಉಂಟುಮಾಡುವಂತಿವೆ. ಸೇಗಿಲ ಆಟ, ಚಾಚಾ ನೆಹರು, ಪೋಂ ಪೋಂ ಬಸ್ಸು, ಮುದ್ದು ಚಿಟ್ಟೆ, ಪುಟಾಣಿ ಪಾಪು, ಕೂಡೋಣ ಹಾಡೋಣ, ಹಳ್ಳಿಯಿಂ ದಿಳ್ಳಿ, ಇರುವೆ-ಮಗು ಇತ್ಯಾದಿ ಕವಿತೆಗಳೆಲ್ಲವೂ ಮಕ್ಕಳ ನಿತ್ಯ ಜೀವನಕ್ಕೆ ಸಂಬಂಧಪಟ್ಟ ವಿಷಯುಗಳೇ ಆಗಿವೆ. ಈ ಮೇಲ್ಕಂಡ ನಿದರ್ಶನಗಳಿಂದ ಪ್ರಕೃತ ಗ್ರಂಥಕಾರರು ಮಕ್ಕಳ ಮನೋಧರ್ಮವನ್ನು ಅನುಸರಿಸಿ ಅವರಿಗೆ ಪ್ರಿಯವಾಗುವ ಮತ್ತು ಉಪಯೋಗವಾಗುವ ವಿಷಯುಗಳನ್ನು ಆರಿಸಿ ಸುಲಭವಾದ ಶೈಲಿಯಲ್ಲಿ ಕವಿತೆಗಳನ್ನು ಕಟ್ಟಿ ಹಾಡಿರುವುದು, ಕವಿಯ ವ್ಯವಹಾರ ಕೌಶಲ್ಯಕ್ಕೆ ನಿದರ್ಶನವಾಗಿದೆ.

ಕನ್ನಡದಲ್ಲಿ ಮಕ್ಕಳ ಸಾಹಿತ್ಯ ಬಹಳ ಕಡಿಮೆಯಾಗಿದೆ. ಡಾ. ಕಾರಂತ, ಜಿ. ಪಿ. ರಾಜರತ್ನಂ, ದಿ. ಹೊಯ್ಸಳ, ಶ್ರೀ ಬಿ. ಎಸ್. ಪಾಂಡುರಂಗರಾವ್, ಕವಿ ಸಂಗಮೇಶ ಮೊದಲಾದವರು ಈ ಬಗೆಗೆ ಪ್ರಯತ್ನಗಳನ್ನು ನಡೆಸಿ, ಬಾಲ ಸಾಹಿತ್ಯವನ್ನು ಕುರಿತು

ಗ್ರಂಥಗಳನ್ನು ಬರೆದಿರುವುದುಂಟು. ಆದರೆ ಇಂಗ್ಲೀಷ್ ಮೊದಲಾದ ಪಾಶ್ಚಾತ್ಯ ಸಾಹಿತ್ಯಗಳಲ್ಲಿ ಬಂಗಾಳ ತಮಿಳು ಮೊದಲಾದ ಭಾರತೀಯ ಸಾಹಿತ್ಯಗಳಲ್ಲಿ ಮಕ್ಕಳ ಅಭಿರುಚಿಗೆ ತಕ್ಕ ಗ್ರಂಥಗಳ ನಿರ್ಮಾಣದ ಬಗೆಗೆ ಆಗಿರುವ ಮತ್ತು ಆಗುತ್ತಿರುವ ಪ್ರಯತ್ನಗಳನ್ನು ಹೋಲಿಸಿ ನೋಡಿದಾಗ ಕನ್ನಡಿಗರು ಬಹಳ ಹಿಂದೆ ಬಿದ್ದಿದ್ದಾರೆ ಎಂದುಕೊಳ್ಳಬೇಕಾಗುತ್ತದೆ. ಸರ್ಕಾರದವರು, ಕನ್ನಡ ಸಾಹಿತ್ಯ ಪರಿಷತ್ತು ಮೊದಲಾದ ಹೊಣೆಗಾರಿಕೆಯುಳ್ಳ ಸಂಸ್ಥೆಗಳು ಈ ಬಗೆಗೆ ತಕ್ಕಷ್ಟು ಪ್ರಯತ್ನವನ್ನು ನಡೆಸಿ, ಪರಿಸ್ಥಿತಿಗೆ ಅನುಗುಣವಾಗಿ ನಾಡಿನ ಮುಂದಿನ ಪ್ರಜೆಗಳಾದ ಮಕ್ಕಳು ಮುಂದೆ ಬರಲು ತಕ್ಕ ಸಾಹಿತ್ಯವನ್ನು ನಿರ್ಮಾಣ ಮಾಡುವುದು ಅಗತ್ಯವಾಗಿದೆ. ಕನ್ನಡದಲ್ಲಿ 'ನಮ್ಮ ಪುಸ್ತಕ' ಮೊದಲಾದ ಪತ್ರಿಕೆಗಳು ಹುಟ್ಟಿ ನಿಂತುಹೋದುವು. ಮದರಾಸಿನ 'ಚಂದಮಾಮ' ಒಂದು ಮಾತ್ರ ನಾಡಿನ ಬಳಕೆಯಲ್ಲಿದೆ. ಮಕ್ಕಳ ಕೂಟ, ಮಕ್ಕಳ ಮಂಟಪ ಮೊದಲಾದ ಸಂಸ್ಥೆಗಳು ಇದಕ್ಕಾಗಿ ಶ್ರಮಿಸುತ್ತಿವೆ. ಶಿಶು ವಿಹಾರಗಳ ಸಂಖ್ಯೆ ಎಲ್ಲೆಲ್ಲಿಯೂ ಹೆಚ್ಚುತ್ತಿದೆ. ಆದರೂ ಈ ಬಗೆಗೆ ವಿಶಾಲವಾದ ಕರ್ನಾಟಕದಲ್ಲಿ ಹೆಚ್ಚು ಹೆಚ್ಚು ಪ್ರಯತ್ನಗಳು ನಡೆಯಬೇಕೆಂಬುದನ್ನು ನಾವು ಒಪ್ಪಿಕೊಳ್ಳಬೇಕಾಗಿದೆ. ಶ್ರೀ ಭುವನೇಶ್ವರಿಯು ಶ್ರೀಯುತರಿಗೆ ಹೆಚ್ಚು ಹೆಚ್ಚು ಆಯುರಾರೋಗ್ಯಭಾಗ್ಯಗಳನ್ನು ಕೊಟ್ಟು ಇಂಥಹ ಇನ್ನೂ ಹೆಚ್ಚಿನ ಸೇವೆಯನ್ನು ಮಾಡಿಸುವಂತಾಗಲಿ ಎಂದು ಪ್ರಾರ್ಥಿಸುತ್ತೇನೆ.

ದಿನಾಂಕ ೧೩–೧೧–೧೯೬೭ **ಬಿ. ಶಿವಮೂರ್ತಿ ಶಾಸ್ತ್ರಿ**

ಬೆಂಗಳೂರು–೨ ಸಂಪಾದಕ 'ಶರಣ ಸಾಹಿತ್ಯ'

# ನನ್ನ ನಾಲ್ಕು ಮಾತು

ಪುಟಾಣಿ ಪದ್ಯ ಮಾಲಿಕೆಯಿಂದ ಸಿಂಗರಿಸಿಕೊಂಡು ಹೊರ ಹೊರಟಿರುವ ಮಕ್ಕಳ ಅಭಿನಯ ಗೀತೆಗಳ ಈ "ಗೊರವಯ್ಯ" ಶ್ರೀ ಶಾರದಾಂಬೆಯ ಅನುಗ್ರಹದಿಂದ ರೂಪಿತವಾಗಿರುವ ನನ್ನ ಮೂರನೆಯ ಕವನ ಸಂಕಲನ. ಎಳೆಯರ ಮಾನಸಿಕ ಬೆಳವಣಿಗೆ ಹಾಗೂ ಮನರಂಜನೆಯ ದೃಷ್ಟಿಯಿಂದ ನನ್ನ ಪ್ರೀತಿಯ ಪುಟಾಣಿಗಳಿಗಾಗಿಯೇ "ಗೊರವಯ್ಯ" ಚಿತ್ರಿತವಾಗಿದೆ. ಈ ನನ್ನ ಪ್ರಯತ್ನ ಸ್ವಲ್ಪಮಟ್ಟಿಗಾದರೂ ಫಲಪ್ರದವಾದರೆ ನಾನು ಕೃತಾರ್ಥ.

ಇದರಲ್ಲಿರುವ ಕೆಲವು ಪದ್ಯಗಳು ತುಂಬಾ ಹಿಂದೆಯೇ ಬರೆದವುಗಳು; ಕೆಲವು ಇತ್ತೀಚಿನವು. ಇಲ್ಲಿನ ಹಲವು ಪದ್ಯಗಳು ಕನ್ನಡ ನಾಡಿನ ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ವಿಕಟ ವಿನೋದಿನಿ, ಸರಸ್ವತಿ ಮೊದಲಾದ ಪತ್ರಿಕೆಗಳಲ್ಲಿ ಎಳೆಯ ಗೆಳೆಯರ ಮುಂದೆ ಬಂದಿವೆ. ಈ ಪತ್ರಿಕಾ ಕರ್ತೃಗಳಿಗೆ ನಾನು ಋಣಿ. ಕೆಲವು ಅಭಿನಯ ಗೀತೆಗಳಿಗೆ ಅನೇಕ ಶಿಶು ವಿಹಾರ ಹಾಗೂ ಶಾಲೆಗಳಲ್ಲಿ ಹಾಡಲು, ಆಡಲು, ಆನಂದಿಸಲು ಅನುಕೂಲವಾಗುವಂತಹ ಧಾಟಿಯಲ್ಲಿ ನೃತ್ಯಗಳಿಗೂ ಅಳವಡಿಸಿ ಕೊಳ್ಳಲಾಗಿದೆ. ಈ ನನ್ನ ಹಿತೈಷಿಗಳಿಗೆ ನನ್ನ ಧನ್ಯವಾದಗಳು. ಈ ದಿಶೆಯಲ್ಲಿ ತುಂಬು ಹೃದಯದ ಸಹಕಾರವಿತ್ತಿರುವ ನನ್ನ ಗೆಳೆಯ, ಆಕಾಶವಾಣಿ ಕಲಾವಿದ ಶ್ರೀ ಎ. ಪದ್ಮನಾಭನ್ ಅವರು ಅಭಿನಂದನಾರ್ಹರು.

ಕೆಲವು ರೇಖಾಚಿತ್ರಗಳನ್ನೂ ಮುಖಪುಟದ ನಕ್ಷೆಯನ್ನೂ ಬಿಡಿಸಿಕೊಟ್ಟು ಉಪಕರಿಸಿರುವ ಗೆಳೆಯ ಶ್ರೀ ಹೆಚ್. ಆರ್. ನಾಗರಾಜರವರಿಗೂ, ಈ ಗೊರವಯ್ಯನು ಹೀಗೆ ಶೃಂಗರಿಸಿ ಕೊಂಡು ಹೊರಬರಲು ಆಧಾರವಾಗಿ ನಿಂತು ಪ್ರೋತ್ಸಾಹಿಸು

ತ್ತಿರುವ ಗೆಳೆಯರಾದ ಸರ್ವಶ್ರೀ ಬಿ. ಕೆ. ಅಪ್ಪಯ್ಯ ದೀಕ್ಷಿತ್, ಆರ್. ಚಂದ್ರಶೇಖರಯ್ಯ, ಬಿ. ಮುನಿಯಪ್ಪ, ಬಿ. ಮುದ್ದುರಾಂ ಶ್ರೀ ಕೃಷ್ಣ ಮತ್ತು ವಿಶೇಷವಾಗಿ ಶ್ರೀ ಗೊ. ರು. ಚನ್ನಬಸವಯ್ಯ ಮೊದಲಾದವರಿಗೆ ನಾನು ಕೃತಜ್ಞ.

ಗೊರವಯ್ಯನ ಪ್ರಕಾಶನದ ಹೊಣೆಯನ್ನು ಹೊತ್ತಿರುವ ಬೆಂಗಳೂರಿನ ಆದರ್ಶ ನಾಟಕ ಸಭ (ರಿ.) ಅವರಿಗೂ ನಿಜಕ್ಕೂ ಅತಿ ಅಲ್ಪಾವಧಿಯಲ್ಲಿ ಸ್ನೇಹಭಾವನೆಯಿಂದ ಅಚ್ಚುಕಟ್ಟಾಗಿ ಅಚ್ಚು ಹಾಕಿ ಕೊಟ್ಟಿರುವ ಮನು ಪ್ರಿಂಟಿಂಕ್‌ನವರಿಗೂ, "ಮಕ್ಕಳ ದಿನಾಚರಣೆ"ಯ ಅಂಗವಾಗಿ ಗೊರವಯ್ಯನನ್ನು ಬಿಡುಗಡೆ ಮಾಡುವ ಸೌಜನ್ಯವನ್ನು ತೋರಿರುವ "ಮೈಸೂರು ಪ್ರದೇಶ ಯುವಕ ಕಾಂಗ್ರೆಸ್" ಕಾರ್ಯಕರ್ತರಿಗೂ ಬಿಡುಗಡೆಯ ಸಮಾರಂಭದ ಮುಖ್ಯ ಅತಿಥಿಗಳಾದ ಅಧ್ಯಕ್ಷರಾದ ಡಾ॥ ಕೆ. ನಾಗಪ್ಪ ಆಳ್ವ ಅವರಿಗೂ, ಮಾನ್ಯಮಂತ್ರಿಗಳಾದ ಶ್ರೀ ಬಿ. ಡಿ. ಜತ್ತಿ ಅವರಿಗೂ, ಮೈಸೂರು ರಾಜ್ಯ ನೆಹ್ರುಭವನದ ಉಪಾಧ್ಯಕ್ಷರಾದ ಶ್ರೀ ವೈ. ರಾಮಚಂದ್ರ ಅವರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಈ 'ಗೊರವಯ್ಯ'ನನ್ನು ಒಂದು ವಿಶೇಷ ರೀತಿಯಲ್ಲಿ ಶೃಂಗರಿಸಿರುವ ಹಿತೈಷಿಗಳಾದ ಹೆಸರಾಂತ ಸಾಹಿತಿ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಹಾಗೂ ಮೈಸೂರು ಪತ್ರಿಕಾ ಕರ್ತರ ಸಂಘದ ಅಧ್ಯಕ್ಷ-ಸಾಹಿತಿ ಶ್ರೀ ಹಿ. ಮ. ನಾಗಯ್ಯ ಅವರು ನನ್ನ ಪ್ರೀತಿಪೂರ್ವಕ ವಂದನೆಗಳನ್ನು ಸ್ವೀಕರಿಸಬೇಕಾಗಿ ನನ್ನ ನಮ್ರ ವಿನಂತಿ.

ಪುಟಾಣಿ ಮಂದಿರ್
ದೊಡ್ಡಬಳ್ಳಾಪುರ ೧೨-೧೧-೬೭     **—ಕೋಸು. ಸಂಪುಟಾಣಿ**

# ಗೊರವಯ್ಯ

## ಅನುಕ್ರಮಣಿಕೆ

# ಸೊಂಡಿಲ ಗಣಪ



ಸೊಂಡಿಲ ಗಣಪ
ಸುಂಡಿಲಿ ಭೂಽಪ
   ಬಂದಾ ಬಂದಾಽ...ಬಂದಾ ಬಂದ.
ಕಾಯೀಽ ಕಡಬು
ಹೊಟ್ಟೆಽ ಡುಬ್ಬು
   ತಂದಾ ತಂದಾಽ...ತಂದಾ ತಂದ.

ಪಾಶಾಂಕುಶ ಕೈಲಿ
ಕೋರೆಹಲ್ಲು ಒಂದ್ರಲ್ಲಿ
   ಬಂದಾ ಬಂದಾಽ...ಗಣಪಾಽ ಬಂದ.
ವಿದ್ಯೆ ಬುದ್ಧಿ ನಮಗೆ
ಕೊಟ್ಟು ಒಳ್ಳೆ ದಾರಿಗೆ
   ತಂದಾ ತಂದಾಽ...ಆ–ನಂದ ತಂದ.

ಮರಿಗಳು ಕೂಽಡುವ
ಥಕ ಥೈ...ಕುಣಿಯುವ
   ಬನ್ನೀ ಬನ್ನೀಽಽ...ಎಲ್ಲಾಽ ಬನ್ನಿ.
ಗೌರಿಶಿವ ಪುತ್ರಗೆ.
ಕೀರುತಿಯ ದೇವಗೆ
   ಜಘೋ ಜಘೋಽ...ಜಘೋ ಎನ್ನಿ.

# ಬತ್ತದ ಬೀಡು



ಬತ್ತಾಽ... ಬತ್ತಾಽಽ... ಬತ್ತಾಽ... ಬತ್ತಾಽಽ...

ಬತ್ತ ಬತ್ತ ಬಂತು ನಮ್ಮ ಬತ್ತದ ಬೀಡು- ನಾವ್
ಉತ್ತು ಬಿತ್ತಿ ಬೆಳೆವ ನಮ್ಮ ಮುತ್ತಿನ್ ನಾಡು... ॥ಪ॥
ಬತ್ತಾ ಬತ್ತಾ...ಬತ್ತಾ ಬತ್ತಾ...

ಜಗವೆಲ್ಲ ಹಸುರಾಗಿ ಮಲಗಿ ಇದೆ –ನಮ್ಮ
ಸುಕ ದುಕ್ಕ ಮರಿಯಾಕೆ ಹಾಯಾಗಿದೆ... ಬತ್ತಾ ಬತ್ತಾ...

ಬೀಸುತಿದೆ ಬಯಲಾಗೆ ಹೊಸಗಾಳಿ –ಹೊತ್ತು
ತರುತಿದೆ ಹೊಸಹೊಸ ರಾಗಾಽವಳಿ –ಬತ್ತಾಬತ್ತಾ...

ರೆಕ್ಕೆ ಹಕ್ಕಿ ಅಂಬಾರ್‌ದೊಳ್ಗೆ ಆಡುತ್ತಾವೆ– ಅಕ್ಕ
ಚಿಕ್ಕ ಚೊಕ್ಕ ಚುಕ್ಕಿಯಂಗೆ ಕಾಣುತ್ತಾವೆ ...ಬತ್ತಾಬತ್ತಾ...

ಭೂಮಿತಾಯಿ ಮಡಿಲೊಳ್ಗೆ ಮೆರೆಯೋಣ– ನಮ್ಮ
ಬಾಧೆ ಗೀಧೆನೆಲ್ಲ ನಾವು ಮರೆಯೋಣ... ಬತ್ತಾಬತ್ತಾ...

ಮಳೆಹೊಳೆಯನು ನಾವು ಪೂಜಿಸೋಣ– ನಮ್ಮ
ಬೆಳೆಯನು ಬಂಗಾರ್ವ ಮಾಡೋಣ... ಬತ್ತಾಬತ್ತಾ...

ಬತ್ತ ಬೆಳೆದು ಜಗಕೆಲ್ಲ ಉಣಿಸೋಣ– ರೈತ
ಜೀವನವ ಸಾರ್ಥಕವ ಪಡಿಸೋಣ... ಬತ್ತಾಬತ್ತಾ...

ಮೂರು ಲೋಕಕ್ಕೆಲ್ಲ ಮುಕ್ತಿ ತೋರಿಸ್ತಾನೆ– ದೇವ
ಕೀರುತಿಯ ದಾರಿಯಲ್ಲಿ ಸೇರಿಸ್ತಾನೆ...ಬತ್ತಾಬತ್ತಾ...



# ಕಂದನಿಗೆ......ಸುವ್ವಿ



ಸುವ್ವಿ ಸುವ್ವಿಽಽ... ಸುವ್ವಿ ಸುವ್ವಿಽ...

ಹೊತ್ತುಟ್ಟಿ ಹೊತ್ತಾಯ್ತು
ಎದ್ದೇಽಳು ಕಂದ.
ಹಲ್ಲುಜ್ಜಿ ಕಯ್ಯ ತೊಳೆದು
ನಮಿಸಯ್ಯಾ...ಕಂದ...
ಸುವ್ವಿ ಸುವ್ವಿಽಽ...ಸುವ್ವಿ ಸುವ್ವಿಽಽ...

ತಿಂಡಿ ತೀರ್ಥವ ಮುಗಿಸಿ
ಶಿಸ್ತು ಶಾಲೆಗೆ ಹೋಗು;
ಆಟ ಪಾಠದ ಜತೆಗೆ
ಗುರುಗಳಿಗೆ ಬಾಗು,
ಕಂದ ಕಂದಾಽಽ... ಕಂದ ಕಂದಾಽಽ

ಒಂದೆರಡು ಮೂರ್ನಾಲ್ಕು
ಮತ್ತೆ ಐದಾರೇಳು
ಎಂಟು ಒಂಬತ್ ಹತ್ತು,
ಮಗ್ಗಿ ಲೆಕ್ಕವ ಹೇಳು.
ಸುವ್ವಿ ಸುವ್ವಿಽಽ... ಸುವ್ವಿ ಸುವ್ವಿಽಽ...

ಕಾಲವನು ಕಳೆಯದೆಯೆ
ಪಾಠವನು ಓದು :
ಮಕ್ಕಳೊಳು ಅಕ್ಕರೆಯ
ತೋರಿ ಆಟವ ಆಡು.
ಕಂದ ಕಂದಾಽಽ...
ಕಂದ ಕಂದಾಽಽ...

ಕತ್ತಲೆಗೆ ಮುನ್ನವೇ
ಮನೆ ಸೇರು ಮೂರ್ತಿ :
ಪಾಠ ಊಟವ ಮುಗಿಸಿ
ಮಲಗಯ್ಯ ಕೀರ್ತಿ !...
ಸುವ್ವಿ ಸುವ್ವಿಽಽ...
ಸುವ್ವಿ ಸುವ್ವಿಽಽ...



# ಚಿಣ್ಣರ ಚಿತ್ರ

[ಮಕ್ಕಳು ಇದರಲ್ಲಿ ಬರುವ ಪಾತ್ರಗಳಿಗೆ ತಕ್ಕಂತಹ ವೇಷ ಭೂಷಣಗಳನ್ನು ಹಾಕಿಕೊಂಡು, ಒಟ್ಟಾಗಿ ಕಲೆತು, ಕುಣಿಯುತ್ತಾ ನಲಿಯುತ್ತ ಮನರಂಜಿಸುವ ಬೋಧಪ್ರದ ಶಿಶು ಗೀತಾರೂಪಕ– ಒಬ್ಬೊಬ್ಬ ವೇಷಧಾರಿಯೂ ರಂಗದ ಒಂದೊಂದು ಭಾಗದಿಂದ ಪ್ರವೇಶಿಸಬಹುದು.]

ತಾಧಿಮಿ...ತಕಧಿಮಿ...
ತಾಧಿಮಿ...ತಕಧಿಮಿ...ತದಿಗಿಣ ತೋಽಂ
ತಾಳಕೆ ಮೇಳಕೆ...ಹಾಽಕಿ...ಕದಂ...... ॥ಪ॥

ಬನ್ನಿರಿ... ಬನ್ನಿರಿ... ಬನ್ನಿರಿ...ಬನ್ನಿರಿ...
ದುಡಿಮೆಯ ನಂದಾಽದೀಪವ ಬೆಳಗಿರಿ
ದೇಶದ ಋಣವನು ಸಲಿಸುವ ಸೇರಿರಿ. ॥ಅ॥ಪ
ತಾಧಿಮಿ...ತಕಧಿಮಿ... ತದಿಗಿಣ ತೋಂ......

* * * *



ಓಽ...ಹೋಽಽ...ಓಹೋಹೋಽ...
ಓಹೋಹೋಽಽ...
ಬಂದೆ ಬಂದೇಽ... ಬಂದೆ ಬಂದೇಽಽ...
ಕನ್ನಡ ತಾಯಿಯ ಕೈಗೂಸಾದೆ.
ಕನ್ನಡ ನುಡಿಯನು ಕಲಿಸಲು ಬಂದೆ;
ಸರಸತಿ ಕೃಪೆಯದು ನಮಗಿರಲೆಂದೆ.
ಚಿಣ್ಣರೆ! ಇರಲಿ ಗುರಿಯದು ಒಂದೇ–
'ಭಾಗ್ಯದ ಭಾಷೆಯು ಬೆಳೆಯಲಿ'– ಎಂದೆ.
ಬಂದೇಽ... ಬಂದೇಽಽ...
ಮಕ್ಕಳ ಮಮತೆಯ ಮಾಸ್ತರು ಬಂದೆ...
ತಾಧಿಮಿ... ತಕಧಿಮಿ... ತದಿಗಿಣ ತೊ

ಏs...ಹೇss... ಏಹೇಹೇs... ಏಹೇಹೇss...

ಬಂದೆ ಬಂದೇs...

ಬಂದೆ ಬಂದೇss...

ಒಲವಿನ ಬಯಲಲಿ

ಚೆಲುವನು ತಂದೆ.

ಬಲುಮೆಯ ನೆಲದಲಿ,

ಬಸವನ ಹಿಂದೆ

ದುಡಿವೆನು ಜನತೆಯ

ಹಿತಕ್ಕಾಗೆಂದೆ.

ಮಳೆರಾಯನ ಕೆಳೆ,

ದಯವನು ಪಡೆದೆ

ಇಳೆಯೊಳು ಅನ್ನವ

ನೀಡಲು– ಇಂದೇ,

ಬಂದೇs... ಬಂದೇss... ಬಂದೇs... ಬಂದೇss...

ಮಣ್ಣಿನ ಮಗ ನಾ ರೈತನು– ಬಂದೆ.

ತಾಧಿಮಿ...ತಕಧಿಮಿ...ತದಿಗಿಣ ತೋಂ...

ಆs...ಹಾss... ಆಹಾಹಾs... ಆಹಾಹಾss...
ಬಂದೆ ಬಂದೇss... ಬಂದೆ ಬಂದೇss...
ಸುಖ ಬಾಳಿಗೆ ಸಂಜೀsವಿನಿ ತಂದೆ.
ಯಂತ್ರವ ಬಿಟ್ಟೆ, ಮಂತ್ರವ ತೊರೆದೆ.
ಗ್ರಂಥವನೋದುತ ತಂತ್ರವ ಕಂಡೆ.
' ಸಕಲರ ಕುಶಲಕೆ ಸಿದ್ಧವು '— ಎಂದೆ :
ಮಾನವ ಸೇವೆಯು ಮಾಡಲು ಬಂದೆ.
ಬಂದೇs... ಬಂದೇss...
ರೋಗಿಯ ಮಿತ್ರನು, ವೈದ್ಯನು ಬಂದೆ.
ತಾಧಿಮಿ...ತಕಧಿಮಿ...ತದಿಗಿಣ ತೋಂ...

* * * *

ಹೀs... ಹೀss...ಹೀಹೀಹೀs...ಹೀಹೀಹೀss...
ಬಂದೆ ಬಂದೇss... ಬಂದೆ ಬಂದೇss...
ರಕ್ಷಕ, ಶಿಕ್ಷಕ, ನಾನೋs ಬಂದೆ.
' ನ್ಯಾಯಕೆ ಶಿರವನು ಬಾಗುವೆಗಿಂದೆ
ಬಾಗುವೆ ಶಿರವನು ಎಂದೂ '— ಎಂದೆ.
ಪ್ರಜೆಗಳ ಹಿತವನು ಬಯಸುತ ನುಡಿದೆ :
ಕಂಟಕ ಕಳೆಯುವ ಅಧಟನು ಆsದೆ.
ಬಂದೇs... ಬಂದೇss...
ನ್ಯಾಯದ ಮಾತೆಯ ಸೇವಕ ಬಂದೆ.
ತಾಧಿಮಿ...ತಕಧಿಮಿ...ತದಿಗಿಣ ತೋಂ...

ಲೆಫ್ಟ್... ರೈಟ್... ಲೆಫ್ಟ್‌ರೈಟ್... ಲೆಫ್ಟ್ ರೈಟ್...





ಬಂದೆ ಬಂದೇss...
ಬಂದೆ ಬಂದೇss...
ರಾಷ್ಟ್ರದ ರಕ್ಷಣೆ
ಹೊಣೆಯನು ತಂದೆ.
ಚೀಣೆಯೆ ಇರಲಿ,
ಪಾಕಿಯೆ ಬರಲಿ
ನಮ್ಮಯ ಕೈಯದು
ಮೇಲೇs ಇರಲಿ.
ದೇಶದ ಸೇವೆಗೆ
ವಿಶ್ವಾಸಲು ಇರಲಿ:
ನಮ್ಮಯ ಸರ್ವವು
ಎಂದಿಗೂ– ಇಲ್ಲಿ.
ಕೀರುತಿ ದೇವನ
ಕೃಪೆ ನಮಗಿರಲಿ,
ಭಾರತಿ ತಾಯಿಯ
ಭವ್ಯತೆ ಬೆಳಗಲಿ.

ಬಂದೇs... ಬಂದೇss... ಬಂದೇs... ಬಂದೇss...
ಸ್ವದೇsಶಪ್ರೇಮಿಯು– ಸೈನಿಕ ಬಂದೆ.

ತಾಧಿಮಿ... ತಕಧಿಮಿ... ತದಿಗಿಣ ತೋಂ
ತಾಳಕೆ ಮೇಳಕೆ ಹಾsಕಿ ಕದಂ... ಹಾsಕಿ ಕದಂ...

# ಗಂಡು ಬಂತು...ಗಂಡು!

ಗಂಡು ಬಂತು... ಗಂಡು!
ಹೆಣ್ಣಿನ್ ಕೂಡ ಗಂಡು,
ನಮ್ಮ ವಿಟ್ಟು ಗಂಡು:

ಕೋಟು ಪರಟು ತೊಟ್ಟು
ಝರಿ ಪಂಚೆ ಉಟ್ಟು
ಕೈಯಿಗ್ ಕೈಯಿ ಕೊಟ್ಟು.
ಗಂಡು ಬಂತು...ಗಂಡು!

ಟೋಪಿ ತಲೆ ಮೇಲೆ
ಕಾಲು ಚಪ್ಪಲಿ ಮೇಲೆ
ಕೆಲ್ಸ ಹೆಗಲ್ ಮೇಲೆ.
ಗಂಡು ಬಂತು...ಗಂಡು!



ತಾಳ ಮೇಳದೊಡನೆ
ಕಾಲು ಜಾರಿದವನೆ
ನೋಡ್ದ ನೆಲ ಸುಮ್ಮನೆ!
ಗಂಡು ಬಂತು...ಗಂಡು!

ಉದ್ದದಲ್ಲಿ ಉದ್ದ,
ಎಲ್ಲ ಕೆಲ್ಸಕ್ ಸಿದ್ಧ,
ಬುದ್ಧಿಯಲ್ಲಿ ಮುದ್ದ...
ಗಂಡು ಬಂತು... ಗಂಡು!

# ಗೊ ರ ವ ಯ್ಯ

ಡುಂs... ಡುಂs... ಡುಮುಕ್
ಡುಂಡುಂ... ಡುಂಡುಂ... ಡುಮುಕ್
ಡುಂs... ಡುಂss...ಡುಮುಕ್
ಡುಂಡುಂ... ಡುಂಡುಂ... ಡುಮುಕ್....

ಗೂs... ಗೂss... ಗುಮ್ಮಯ್ಯ!
ಬಾs... ಬಾss... ಗೊರವಯ್ಯ.

ಗೊರವ ಮಾಮ, ಗುಮ್ಮ ಮಾಮ
ಕರಡಿ ಟೋಪಿ, ಕವಡೆ ಮಾಮ.
ಬಂದಾ... ಬಂದಾ...
ಕಲ್ಲುs ಸಕ್ರೆ, ಕೋsಡುಬಳೆ
ಗಲ್ಲ ಮುಟ್ಟಿ ಕೈಗೆ ಬಳೆ
ತಂದಾ ತಂದಾ... 'ಎಲ್ಲ–
ಬನ್ನೀs'... ಎಂದ...

ದಪ್ಪ ದೇಹ, ಕಪ್ಪು ಮೋರೆ
ಒಪ್ಪವಂಥ ಉದ್ದಕೋರೆ!
ಮಾಮಾs ಬಂದ
ಗಿಡ್ಡ ಕೈಯು ಆಡ್ಡ ಕಾಲ
ದೊಡ್ಡ ಮಾಮ, ದಾಡಿವಾಲ!
ಭಲೇ ಬಂದ– ಮತ್ತೆ
"ಗುಮ್ಮಾ"– ಎಂದ.

ಗಣಗಣ ಗಂಟೆಯು
ಬಾರಿಸಿ ಬಂದ :
ಘಲುಘಲು ಗೆಜ್ಜೆಯು
ನಾದವ ತಂದ.
ಹಿಡಿದಿಹ ಕೈಯಲಿ
ಕುನ್ನಿಯನೊಂದು :
ಬರುತಿದೆ ಹಿಂದೆಯೆ
ಮಕ್ಕಳ ಹಿಂಡು!
ಗಣ ಗಣ ಗಂಟೆ
ಡಣ ಡಣ ಡಮರುಗ
ಝಣ ಝಣ ಗೆಜ್ಜೆ
ಕುಣಿಯುವ ಗೆಣೆಮಗ
ಬಂದಾ ಬಂದ– " ಜತೆ–
ಬೇಕು "– ಎಂದ...
ನಲಿಯುವ, ನೆಗೆಯುವ
ಥಕ ಥಕ ಕುಣಿಯುವ
ಚಂದಾ... ಚಂದಾ...
ಮಕ್ಕಳಿಗೆ ಮೂದುತಿ,
ಮರಿಗಳ ಕೀರುತಿ–
ಮಾಮಾ ಬಂದಾ– ಆ–
ನಂದಾ ತಂದಾ...
ಗೂ... ಗೂ... ಗುಮ್ಮಯ್ಯ
ಬಾ... ಬಾ... ಗೊರವಯ್ಯ
ಡುಂ... ಡುಂ... ಡುಮುಕ್...
ಡುಂಡುಂ... ಡುಂಡುಂ... ಡುಮುಕ್...

# ನೇಗಿಲ ಆಟ



ಒಂದು... ಆದಮೇಲೆ ಎರಡು
ನೆಲವನು ಉಳುಮೆಯ ಚೆಂದದಿ ಮಾಡು.

ಮೂರು... ಆದಮೇಲೆ ನಾಲ್ಕು
ಬಿತ್ತನೆ ಬೀಜವ, ಗೊಬ್ಬರ ಹಾಕು.

ಐದು... ಆದಮೇಲೆ ಆರು
ಕಣದಲಿ ರಾಶಿಯ ಕಾಣು ; ತೋರು.

ಏಳು... ಆದಮೇಲೆ ಎಂಟು
ದೇಶದ ಜನತೆಗೆ ರೈತನೆ– " ನಂಟು ".

ಒಂಭತ್ತು... ಆದಮೇಲೆ ಹತ್ತು
ನೇಗಿಲ ಆಟವು ಹೀಗ್ಯಾಯ್ತು.

ಒಂದರಿಂದ ಹತ್ತು, ಹೀಗಿತ್ತು
ಕೀರುತಿ ದೇವನ ಕೃಪೆ ಇತ್ತು.

# ಚಾ ಚಾ ನೆ ಹ ರು



ಮರೆಯಾದೆಯ ಮಂಗಳಮೂರ್ತಿ!
ಕೊರೆಯಾಯಿತೆ ಜನತೆಯ ಪ್ರೀತಿ!?
ಮೂಡಿದೆ ಮನದೊಳಶಾಂತಿ
ಬ್ಯಾರ್ರೆ ಭಾರತ ಜ್ಯೋತಿ!

ಗಾಂಧಿಯ ತತ್ವವ ಮನ್ನಿಸಿ-
ಧನಕನಕವ ನೀ ತ್ಯಜಿಸಿ.
ದೇಶದ ಸೇವೆಯ ಬಯಸಿ
ದುಡಿಮೆಯ ಪಾಠವ ಕಲಿಸಿ-
ಮರೆಯಾದೆಯ...

ಮಕ್ಕಳ ಮೊರೆಯನು ಆಲಿಸು
ಸಕ್ಕರೆ ಮಾತನು ಕಳಿಸು;
ಅಕ್ಕರೆ ಚಾ ಚಾ! ಬಯಸು:
ಭಾರತೆ ಕನಸಿನ ನನಸು.
ಮರೆಯಾದೆಯ...

ಕಣ್ಣೀರಿನ ಕೋಡಿಯಲಿದೆ ಜನತೆ
ನೆನೆಯುತ ನೆನೆಯುತ ನಿನ್ನಯ ಮಮತೆ
ಎಲ್ಲಿದ್ದರು ಹೇಗಿದ್ದರು ನೀನು
ಭಾರತ ಕೀರುತಿ ಭಾಗ್ಯದ ಭಾನು!
ಭಾರತ ಕೀರುತಿ ಭಾಗ್ಯದ ಭಾನು!
ಮರೆಯಾದೆಯ...

# ಸೋನಿ ಅಮ್ಮ... ಬಂದಳು

ಬಂದಳಮ್ಮ...ಬಂದಳು
ಸೋನಿ ಅಮ್ಮ...ಬಂದಳು.

ಬಾಯಿ ಮುಗ್ಗಿ ಹೇಳುತ್ತ
ಹಲಗೆ ಬಳಪ ತಂದಳು ;
ಒಂದು, ಎರಡು... ಎಣಿಸುತ್ತ
ಭಾನು... ಸೋಮ... ಎಂದಳು.
ಬಂದಳಮ್ಮ...ಬಂದಳು...

"ಸಂಗ ಬೇಕು, ನಿನ್ನ ಜತೆ
ಟೂನು ಗೀನು ಏನು ಇಲ್ಲ
ಸೇರೆ ಅಮ್ಮ ನಮ್ಮ ಜತೆ
ಕೂಡಿಕೊಂಡು ಇರುವ, ಎಲ್ಲ–"
ಎಂದುಕೊಂಡು ಬಂದಳು
ಬಂದಳಮ್ಮ...ಬಂದಳು.

ಮಾಯಿ ಜತೆ ಆಡುತ್ತ
ಆಟ, ಪಾಠ ಬರೆಯುತ್ತ,
'ನಾನೆ ಜಾಣೆ'– ಎಂದಳು ;
ಕುಣಿ– ಕುಣಿ... ಎನ್ನುತ್ತ
ಹಾರಿ, ಚಿಮ್ಮಿ ಬಂದಳು ;
'ಬಾರೋ ಬಾಬಿ' – ಎಂದಳು.
ಬಂದಳಮ್ಮ... ಬಂದಳು ...



ಬೊಂಬೆ ಆಟ, ಕಂಬಿ ಆಟ,
ಗುಡಿಯ ಆಟ, ಗರಡಿ ಆಟ–
ಆಡಿ ಸೋತು ಮನೆಯ ಕಡೆ
ಮಾಡಿದಳು, ಓಡ್ಯಾಟ,
ಬಂದಳಮ್ಮ...ಬಂದಳು...

---

## ಪೋಂಪೋಂ...ಬಸ್ಸು



ಪೋಂಯ್...ಪೋಂಯ್...ಪೋಂಪೋಂಪೋಂಯ್...
ಬಂದಿತು ನಮ್ಮಯ ಭಾರೀ ಬಸ್ಸು
ಹತ್ತಿರಿ, ಕುಳ್ಳಿರಿ–ಬೇಗನೆ...ಬಸ್ಸು
ನಮ್ಮಲಿ ಇಲ್ಲವು–ಸರ್ಕಸ್ಸು.
ರೈಟ್‌ರೈಟ್...ನಾನೆ ಕಂಡಕ್ಟರು
ಧರಣಿಯೆ...ಹೊರಟನು ಡ್ರೈವರು.

ಒಟ್ಟಿಗೆ ನಡೆಯುವ,
ಒಟ್ಟಿಗೆ ಕಲಿಯುವ
ಸೇರುವ ಒಂದೇ ಗುರಿಯನ್ನು:
ಮಾಡುವ ನಮ್ಮಯ ಸೇವೆಯನು.

# ಮುದ್ದು ಚಿಟ್ಟೆ

ಬಾಬಾಬಾ<sub></sub>s... ಬಾಬಾಬಾs...

ಮುದ್ದು ಚಿಟ್ಟೆ !
ಜಾಣ ಚಿಟ್ಟೆ !
ಏಕೆ ಹಾರುವೆ ?s... ಏಕೆ ಹಾರುವೆ ?...

ಹೂವು ಬೇಕೆ ?
ಮಧುವು ಬೇಕೆ ?
ಹೇಳು ತೋರುವೆs... ಕೇಳು ತೋರುವೆ...

* * * * * * *

ಬಾದನೆಮ್ಮ ತೋಟಕೆ
ನೀಡುವೆನು ಊಟಕೆ.

ನೀನೆ ಚಂದ ನೋಟಕೆ,
ಬಂದು ಸೇರು ಆಟಕೆ... ಬಾ...ಬಾ...ಬಾ...
ಮುದ್ದು ಚಿಟ್ಟೆ !...

* * * * * * *



ಸಂಪಿಗೆ, ಸೇವಂತಿಗೆ,
ಸುಗಂಧರಾಜವುss
ಸೂರ್ಯಕಾಂತಿ, ಸ್ಫಟಿಕವಿದೆ,
ರಾಜ ರೋಜವುs... ರಾಜ ರೋಜವು...



ಚೆಂಡು ಹೂವು, ಮಲ್ಲಿ ಹೂವು,
ಮರುಗ ತೋಟವು ;
ಚೆಂದದಂಥ ಬನವು ಇರಲು
ನಿನಗೆ ಆಟವ್ವ... ನಮಗೆ ನೋಟವು...
ಬಾ...ಬಾ...ಬಾ... ಮುದ್ದು ಚಿಟ್ಟೆ !

*　　*　　*　　*

ದೂರ ದೂರ ಓಡಿದರೆ
ಹಾರಿ ಹಾರಿ ಮುಟ್ಟುವೆವು,
ನೆಗೆದು ನೆಗೆದು ಕುಪ್ಪಳಿಸಿ
ಓಡಿ ಓಡಿ ಸೇರುವೆವು... ಬಾ...ಬಾ...ಬಾ...
ಮುದ್ದು ಚಿಟ್ಟೆ

*　　*　　*　　*

ಬಣ್ಣದ ಬಣ್ಣದ ಅಂದದ ಅಂಗಿ
ತೊಟ್ಟಿಹೆ, ತೋರುವೆ ನೂರ್‍ವ ಭಂಗಿ
ಆಡುತ, ಹಾಡುತ ಲಕ್ಷ್ಮೀ ರಂಗಿ
ನೋಡುತ ನಲಿವೆನು ಕೀರುತಿ ತಂಗಿ
ನೋಡುತ ನಲಿವೆನು ಕೀರುತಿ ತಂಗಿ–
ಭಾರತಿ ತಂಗಿ
ಬಾ...ಬಾ...ಬಾ... ಮುದ್ದು ಚಿಟ್ಟೆ...!

# ಪುಟಾಣಿ ಪಾಪು

ಪುಟ್ಟು ಪುಟ್ಟು ಪಾಪು!
ಪುಟಾಣಿ ಪಾಪು!
ಪೆಪ್ಪರಮೆಂಟು
ಚಪ್ಪರಿಸು;
ನೀ ಚೀಪು.
ಭಲೆ ಪಾಪು!



ಅಂಗಿ ಲಂಗ ನಿನಗೆ
ಬಂಗಾರಿ ಅಮ್ಮಗೆ.
ನನಗೇ ಮುತ್ತು.
ತಕೊ ಮುತ್ತು!
ಕೈ ತುತ್ತು.
ಬಾ...... ಬಿತ್ತು.

ಕಾಡಬೇಡ ಅಳುತ
ಆಡಾಡು ನಗುತ;
ಮುದ್ದಿನ ಮೂರ್ತಿ
ಮನೆ ಜ್ಯೋತಿ.
ನೀ...ಕೀರ್ತಿ.
ಜೈ...ಕೀರ್ತಿ.

# ಕೂಡೋಣ-ಹಾಡೋಣ

[ ವೃಂದಗೀತೆ ]

ಒಹೊಹೋऽ... ಹೈಹೈಹೈ.
ಒಹೊಹೋऽऽ... ಹೈಹೈಹೈ... ಹೈಹೈಹೈ... ಹೈಹೈಹೈ...

ತಕ ತಕ... ತೈ ತೈ
ತಕ ತೈ... ತಕ ತೈ...

ತೈತೈ... ತಕ ತೈ ಕುಣಿಯೋಣ
ಭಾರತಿ ದೇವಿಯ ಭಜಿಸೋಣ...
ಬನ್ನಿರಿ ಮಕ್ಕಳೆ! ಕೂಡೋಣऽ
ಐಕ್ಯದ ಒಸಗೆಯ ಹಾಡೋಣ... ॥ಪ॥

ಆಯಿತು ನರಕನ
ಚರಿತೆಯ ವಧೆಯು
ನೆಲೆಸಿತು ನೆಲದಲಿ
ಸುಖವೂ ಶಾಂತಿಯು.
ಬಂದಿತು... ತಂದಿತು
ಮೋದದ ಮಳೆಯು.
ಬೆಳಗಿತು ಇಳೆಯೊಳು
ದೀಪಾऽವಳಿಯು.
ತೈ ತೈ... ತಕ ತೈ... ಕುಣಿಯೋಣ... ॥೧॥

ಬಿರು ಸುರು ಬಾಣ
ಸುರಂಗ ಬಾಣ
ನೆಗೆಯಿತು ಗಗನಕೆ
ಚೊಯ್... ಹೂ ಬಾಣ.
ಭಾವನ ಮೂಗಿಗೆ
ಅಕ್ಕನ ಕುಚ್ಚಿಗೆ
ಕಚ್ಚಿತು... ಕಚ ಕಚ
ಕಿರುನಾಗಣ್ಣ
ತೈತೈ... ತಕ ತೈ... ಕುಣಿಯೋಣ... ॥೨॥

ಚಟ ಚಟ ಹಾರಿತು
ಚಿನಕುರುಳಿ
ಪಟ ಪಟ ನೆಗೆಯಿತು
ಭೂಮಿಯಲಿ.
ಅಣ್ಣನ ಕೈಲಿದೆ
ಕಂತೆ ಮತಾಪು
ಢಮ್ ಢಮ್...ಒಡೆಯಿತು
ಭಲೆಭಲೆ ಕೇಪು
ಸೋನಿಯು ಸುಟ್ಟಳು
ಭೂಚಕ್ರ
ಆಯಿತು ಮಾಯಿಯ
ಮುಖ ವಕ್ರ...
ತೈತೈ... ತಕ ತೈ... ಕುಣಿಯೋಣ... ॥೩॥
ಹೈಹೈಹೈ...

ಕನ್ನಡ ಮಕ್ಕಳು ಕೂಡೋಣ
ಕನ್ನಡ ತಾಯಿಯ ನೆನೆಯೋಣ.
ಭಾರತ ಜ್ಯೋತಿಯ ಬೆಳಗೋಣ
ಕೀರುತಿ ದೇವಗೆ ನಮಿಸೋಣ...

ತೈತೈ... ತಕ ತೈ...ಕುಣಿಯೋಣ
ಭಾರತಿ ದೇವಿಯ ಭಜಿಸೋಣ...

ಒಹೊಹೋಽಽ... ಹೈಹೈಹೈ... ಹೈಹೈಹೈ... ಹೈಹೈಹೈ...



# ಹಳ್ಳಿಯಿಂ ದಿಳ್ಳಿ



ಹಳ್ಳಿಯ ಒಳ್ಳೆಯ ಅಣ್ಣಯ್ಯ
ದಿಳ್ಳಿಯ ಕಿಲ್ಲೆಗೆ ಹೊನ್ನಯ್ಯ,
ಹಳ್ಳಿಯಿಂ ದಿಳ್ಳಿಯು, ನೆನೆಯಯ್ಯ ;

ಸುಳ್ಳಿದು
ಪೊಳ್ಳಿದು
ಜೊಳ್ಳಿದು ಎನ್ನದೆ

ಬೆಳೆಯುತ ದೇಶವ ಬೆಳೆಸಯ್ಯ ;
ಹೊನ್ನಿನ ಹೊಳೆಯನು ಹರಿಸಯ್ಯ.



## ಇರುವೆ... ಮಗು



ಇರುವೆ !... ಇರುವೆ !
ಮುದ್ದಿನ ಇರುವೆ !
ಸಾಲಲಿ ಎಲ್ಲಿಗೆ ಹೋಗುತಲಿರುವೆ ?
ಹೇಳಲೆ ಕತೆಯನು
ಜನತೆಯ ಹಿತವನು
ಕೇಳಲು ಕಾಯುತ ಕುಳಿತಿರುವೆ.

* * * * *

ಮಗುವೆ ಮಗುವೆ !
ಮುದ್ದಿನ ಮಗುವೆ !
ಮನದೊಳು ವ್ಯಾಕುಲ ಹೆಚ್ಚುತಲಿಹುದು.
ಜನರೊಳು ಭೇದವು ಬೆಳೆಯುತಲಿಹುದು.
ದೇಶದ ಐಕ್ಯತೆ ಅಳಿಯುತಲಿಹುದು.
ಅನ್ನಕೆ ಆಹ್ವಾಕಾರವು ಇಹುದು–

ಏನನ್ಯಾಯ ಎನ್ನುತ–ಇದುವೆ
ಯೋಚಿಸುತಿರುವೆ,
ಮರುಗುತಲಿರುವೆ;
ಕೇಳೆಲೆ ಮಗುವೆ !
ಮುದ್ದಿನ ಮಗುವೆ !

ಆದರೆ ನಮ್ಮಲಿ ಹಾಗೇನಿಲ್ಲವು,
ಎಲ್ಲರು ಬೆರೆಯುತ ಒಟ್ಟಿಗೆ ದುಡಿವೆವು.
ಎಲ್ಲರ ಒಳಿತಿಗೆ ಒಟ್ಟಿಗೆ ನಡೆವೆವು.
ಮಡಿಮೆಯು ಮಂತ್ರವ ದೇಶಕೆ ಸಾರ್ವೆವು.
' ಎಂದೂ ನಾವು ಒಂದೇ '– ಎನ್ನುವೆ;
ಹೇಳುತ ನಲಿಯುವೆ–
ಹೇಳೆಲೆ ಮಗುವೆ !
ಮುದ್ದಿನ ಮಗುವೆ !

*　　*　　*　　*　　*

ಇರುವೆ !... ಇರುವೆ !
ಮುದ್ದಿನ ಇರುವೆ !
ಐಕ್ಯದ ಕತೆಯನು ಕೇಳಿದೆ–ಹೇಳುವೆ :
ನಾವೂ ಬುವಿಯಲಿ
ನಿಮ್ಮಯ ತೆರದಲಿ
ದುಡಿವೆವು ಜನತೆಯ ಹಿತಕೆನುವೆ.





## ಬಾಲರ ಬಯಕೆ

ಬನ್ನಿರಿ ಬಾಲರೆ!
ಕನ್ನಡ ಪುತ್ರರೆ!
ಕುಣಿಯುತ ಆಡುವ
ಥೈ... ಥೈ... ಥೈ...
ತಾಯಿಗೆ ನಮಿಸುವ
ಜೈ... ಜೈ... ಜೈ...

ರಾಜನು ನೀನು,
ಮಂತ್ರಿಯು ಇವನು,
ಸೈನ್ಯಕೆ ಸೀನನು.
ಸೈ...ಸೈ...ಸೈ...
ಸಲಿಸುವ ಋಣವನು
ಸೈ...ಸೈ...ಸೈ—
ಸೇರಿಸಿ ಜನವನು
ಕೈ...ಕೈ...ಕೈ...

ಜನಗಳ ನೋವವು
ಕಳೆಯುವ ನಾವವು
ಬೆಳೆಸುತ ಪ್ರೇಮವ,
ಓ... ಹ್ಹೋs... ಹ್ಹೋss...
ಮಧುಮಳೆ ತರಿಸುವ
ಹೈ... ಹೈ... ಹೈ...
ಕೋರುವ ಸುಖವಾ
ಹೈ...ಹೈ...ಹೈ...

ದೇವರ ಮಕ್ಕಳು
ಬಾಳುವ ಜತೆಯೊಳು,
ತಣಿಯುವ, ಕುಣಿಯುವ
ಥಕ... ಥೈ... ಥೈ...
ಕೀರುತಿ ಮಿತ್ರರು
ನಾವ್... ಸೈ... ಸೈ...
ಭಾರತ ವೀರರು
ಸೈ... ಸೈ... ಸೈ...



# ಮ ಮ ತೆ ಯ ಮಾ ತು

ಮಕ್ಕಳ ನಿರ್ಮಲ ಮನಸ್ಸಿನ ಮೇಲೆ ಫಲಪ್ರದವಾದ ಪರಿಣಾಮಗಳನ್ನುಂಟುಮಾಡಿ, ಅವರನ್ನೆಲ್ಲ ಹಾಡಿ-ಕುಣಿಯುವಂತೆ ಮಾಡುವುದರ ಜೊತೆಗೆ ನೀತಿ ಬೋಧನೆಯನ್ನುಂಟುಮಾಡುವ, ಈ "**ಗೊರವಯ್ಯ**"ನ ಹಾಡುಗಳು ಎಲ್ಲರ ಸ್ವಾಗತಕ್ಕೆ ಅರ್ಹವಾಗಿವೆ. ಗೊರವಯ್ಯನ ವೇಷ-ಭೂಷಣ ಮಕ್ಕಳಿಗೆ ಎಷ್ಟು ಕುತೂಹಲಕಾರಿ ಆಕರ್ಷಣೆಯೋ, ಅಷ್ಟೇ ಆತನ ಹಾಡುಗಳು ಅನುಕರಣೀಯವಾಗಿವೆ.

"ಗೊರವಯ್ಯ"ನನ್ನು ಕನ್ನಡ ನಾಡಿನ ಮಕ್ಕಳ ಮುಂದೆ ತಂದು ನಿಲ್ಲಿಸಿರುವ **ಶ್ರೀ ಕೋಸು. ಸಂಪುಟಾಣೆ**ಯವರು ಹಟ್ಟುಕವಿಗಳು ; ಪ್ರತಿಭಾವಂತ ತರುಣರು. ಈಗಾಗಲೇ ಹೊರ ಬಿದ್ದಿರುವ ಇವರ ಕವನ ಸಂಕಲನಗಳಲ್ಲಿ ತಮ್ಮ ಪ್ರತಿಭೆಯನ್ನು ತೋರಿಸಿದ್ದಾರೆ. ಈ ವಿಷಯವನ್ನು ಮನೆ ಮನೆ ಬಾಗಿಲಿಗೆ ಹೋಗಿ ಸಾರುವಂತೆ "ಗೊರವಯ್ಯ"ನಿಗೆ ಹೇಳಲೇಬೇಕಾಗಿಲ್ಲ.

ಒಮ್ಮೆ "ಗೊರವಯ್ಯ"ನನ್ನು ನೋಡಿದ ಕನ್ನಡ ನಾಡಿನ ಮಕ್ಕಳು ಮತ್ತೆ ಮತ್ತೆ ಆತನನ್ನು ನೋಡಲು ಹಾತೊರೆಯು ವುದರಲ್ಲಿ ಅನುಮಾನವಿಲ್ಲ.

ಮಕ್ಕಳ ಮನಸ್ಸನ್ನು ಕುಣಿಸುವ "ಗೊರವಯ್ಯ" ನಂತಹ ಇನ್ನೂ ಕೆಲವರನ್ನು ಗೆಳೆಯ ಶ್ರೀ ಸಂಪುಟಾಣೆಯವರು ಬೇಗ ಬೇಗ ಕಳಿಸಿಕೊಡುತ್ತಾರೆಂದು ನಿರೀಕ್ಷಿಸುತ್ತೇನೆ.

**—ಹಿ. ಮ. ನಾಗಯ್ಯ**
ಅಧ್ಯಕ್ಷ
ಕರ್ನಾಟಕ ರಾಜ್ಯ ಕಾರ್ಯ ನಿರತ ಪತ್ರಿಕೋದ್ಯೋಗಿಗಳ ಸಂಘ.



ದೊಡ್ಡಬಳ್ಳಾಪುರದ ಶ್ರೀ ಕೋಸು. ಸಂಪುಟಾಣೆಯುವರು ತಮ್ಮ ಅನೇಕ ಕೃತಿಗಳಿಂದ ಕನ್ನಡ ನಾಡಿಗೆ ಈಗಾಗಲೇ ಚಿರಪರಿಚಿತರಾಗಿದ್ದಾರೆ. ಬಿ.ಇ. ಪದವೀಧರರಾದ ಶ್ರೀಯುತರು ಈಗ ಲೋಕೋಪಯೋಗಿ ಇಲಾಖೆಯಲ್ಲಿ ಸಿವಿಲ್ ಎಂಜಿನೀಯರಾಗಿ ದುಡಿಯುತ್ತಿದ್ದು, ಸಾಹಿತ್ಯ ಕ್ಷೇತ್ರದಲ್ಲಿಯೂ ಸೇವೆ ಸಲ್ಲಿಸುತ್ತಿರುವುದು ಪ್ರಶಂಸನೀಯ.

ಎರಡು ದಶಕಗಳಿಂದಲೂ ಇವರ ಕವನಗಳು, ಲೇಖನಗಳು, ಚುಟಕಗಳು ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು ಶ್ರೀಯುತರ ಹಲವಾರು ಕವನಗಳು ಬೆಂಗಳೂರು ಆಕಾಶವಾಣಿಯಿಂದ ಪ್ರಸಾರಗೊಂಡು ಜನಮೆಚ್ಚಿಗೆ ಪಡೆದಿವೆ.

ಭಾವನಾಪ್ರಚಾರ ಸಮಿತಿಯ ಕಾರ್ಯದರ್ಶಿಯಾಗಿ, 'ಭಾವನಾ' ಮಾಸ ಪತ್ರಿಕೆಯ ಪ್ರಕಟಣೆಯ ಹೊಣೆ ವಹಿಸಿದುದಲ್ಲದೆ ನೆಲಮಂಗಲದ ಪ್ರೌಢಶಾಲೆಯ 'ಕೊಳಲು' ಲೇಖನ ಸಂಕಲನದ ಸಂಪಾದಕರಾಗಿಯೂ ಮೈಸೂರು ಲೋಕೋಪಯೋಗಿ ಇಲಾಖೆಯ 'ಜೇಯಿಸ್ ಜರ್ನಲ್' ತ್ರೈಮಾಸಿಕ ಪತ್ರಿಕಾ ಪ್ರಕಟಣೆಯ ಸಂಚಾಲಕತ್ವವನ್ನೂ ವಹಿಸಿ ಪತ್ರಿಕಾ ರಂಗದಲ್ಲಿಯೂ ತಮ್ಮ ಅಳಿಲು ಸೇವೆಯನ್ನು ಸಲ್ಲಿಸಿದ್ದಾರೆ.

ಅನೇಕ ನಾಟಕಗಳಿಗೆ ಗೀತೆಗಳನ್ನು ರಚಿಸುವುದರ ಜತೆಗೆ ಶ್ರೀಯುತರು ಒಳ್ಳೆಯ ನಟರೂ ಆಗಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಎಲೆಯ ಮರೆಯ ಕಾಯಿಯಂತೆ ದುಡಿಯುತ್ತಿರುವ ಶ್ರೀಯುತರ ಕನ್ನಡ ಸಾಹಿತ್ಯ ಸೇವೆ ನಿರಂತರವಾಗಿ ಸಾಗಲೆಂದು ಹಾರೈಸೋಣ.